

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 318 |
| ಸದಸ್ಯರ ಹೆಸರು | ಡಾ:.ತೇಜಸ್ವಿನಿಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 14.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅವೈಜ್ಞಾನಿಕವಾಗಿ ಗಣಿಗಾರಿಕೆ ನಡೆಸುತ್ತಿರುವುದರಿಂದ ಸುತ್ತಮುತ್ತಲ ಗಿಡಮರ ವನ್ಯಜೀವಿಗಳಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಗಣಿಗಾರಿಕೆ ಮಾಡಿದ ಆಳವಾದ ಕಲ್ಲಿನ ಹೊಂಡಗಳಲ್ಲಿ ತುಂಬಿಕೊಂಡ ನೀರಿನಲ್ಲಿ ಬಾಲಕರು ಜಾನುವಾರುಗಳು ಬಿದ್ದು ಸಾವನ್ನಪ್ಪಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸಾವನ್ನಪ್ಪಿರುವವರ ಸಂಖ್ಯೆ ಎಷ್ಟು; | ಬಂದಿರುತ್ತದೆ.<br>ದಿನಾಂಕ 10.10.2014 ರಂದು ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಟೇಕಲ್ ಗ್ರಾಮದಲ್ಲಿನ ಕ್ವಾರಿ ಗುಂಡಿಯಲ್ಲಿ 03 ಮಕ್ಕಳು ಹಾಗೂ ದಿನಾಂಕ 24.04.2015 ರಂದು ಬೆಂಗಳೂರು ನಗರ ಜಿಲ್ಲೆಯ ಬೆಟ್ಟಹಲಸೂರು ಗ್ರಾಮದ ಕ್ವಾರಿ ಗುಂಡಿಗಳಲ್ಲಿ 05 ಇಂಜಿನಿಯರಿಂಗ್ ವಿದ್ಯಾರ್ಥಿಗಳು ಬಿದ್ದು ಸಾವನ್ನಪ್ಪಿರುವ ಪ್ರಕರಣಗಳು ಕಂಡುಬಂದಿರುತ್ತವೆ.<br>ಕಳೆದ ಮೂರು ವರ್ಷಗಳ ವಿವರ ಕೆಳಕಂಡಂತಿದೆ: |

| ಕ್ರ. ಸಂ. | ವರ್ಷ | ಪ್ರಕರಣಗಳ ಸಂಖ್ಯೆ | ವ್ಯಕ್ತಿಗಳು ಬಿದ್ದು ಸಾವನ್ನಪ್ಪಿರುವವರ ಸಂಖ್ಯೆ | ಜಾನುವಾರುಗಳು ಬಿದ್ದು ಸಾವನ್ನಪ್ಪಿರುವ ಸಂಖ್ಯೆ |
|---|---|---|---|---|
| 1 | 2019 | 11 | 12 | - |
| 2 | 2020 | 15 | 17 | - |
| 3 | 2021 | 16 | 17 | - |
| ಒಟ್ಟು | | 42 | 46 | - |

| | | |
|---|---|---|
| ಇ) | ಗಣಿಗಾರಿಕೆ ಮಾಡುವಾಗ ಪುಷ್ಟೀಕರಣಿ ಅಥವಾ ಕಲ್ಯಾಣಿಗಳ ಆಕೃತಿಯಲ್ಲಿ ಗಣಿ ಕಲ್ಲನ್ನು ತೆಗೆಯುವುದರಿಂದ ಪರಿಸರ ಸುಂದರವಾಗಿರುವುದಲ್ಲದೆ ಜೀವಿಗಳು ಸುರಕ್ಷಿತವಾಗಿದ್ದು, ಈ ನಿಟ್ಟಿನಲ್ಲಿ ಸರ್ಕಾರ ಅಗತ್ಯ ಕ್ರಮ ವಹಿಸುವುದೇ? | 1. ಮಾನ್ಯ ಸರ್ವೋಚ್ಚ ನ್ಯಾಯಾಲಯದ ಎಸ್.ಎಲ್.ಪಿ ಸಂಖ್ಯೆ 19628-19629/2009, (ದೀಪಕ್ ಕುಮಾರ್ V/s. ಹರಿಯಾಣ ರಾಜ್ಯ) ಪ್ರಕರಣದ ಆದೇಶ ದಿನಾಂಕ 27.02.2012ರಲ್ಲಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲು ಪರಿಸರ ಅನುಮತಿ ಪತ್ರ ಕಡ್ಡಾಯಗೊಳಿಸಿದೆ.<br>2. ಪರಿಸರ ಅನುಮತಿ ಪತ್ರ ಪಡೆಯಲು ಅನುಮೋದಿತ ಕ್ವಾರಿಯಿಂಗ್ ಪ್ಲಾನ್ ಮತ್ತು ಮೈನ್ ಕ್ಲೋಷರ್ ಪ್ಲಾನ್ ಅವಶ್ಯವಿರುತ್ತದೆ.<br>3. ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 2(h)(1) ಪ್ರಕಾರ ಚಾಲ್ತಿ ಕಲ್ಲುಗಣಿ ಗುತ್ತಿಗೆದಾರರು Progressive Mine Closure Plan ಹಾಗೂ ನಿಯಮ 2(d)(6)ರ ಪ್ರಕಾರ Final Mine Closure Plan ಸಲ್ಲಿಕೆಯನ್ನು ಕಡ್ಡಾಯಗೊಳಿಸಿದೆ.<br>4. ಗುತ್ತಿಗೆದಾರರು ಕಲ್ಲು ಗಣಿಗುತ್ತಿಗೆಯನ್ನು ಅನುಮೋದಿತ ಕ್ವಾರಿಯಿಂಗ್ ಪ್ಲಾನ್ ಪ್ರಕಾರ 7.5 ಮೀಟರ್ ಬಫರ್ ಝೋನ್ ಬೆಂಚುಗಳನ್ನು ನಿರ್ವಹಿಸಬೇಕಾಗಿರುತ್ತದೆ.<br>5. ಗಣಿ ಗುತ್ತಿಗೆ ಅವಧಿ ಮುಕ್ತಾಯವಾದ ನಂತರ Final Mine Closure Plan ನಂತೆ ಕಲ್ಲು ಗಣಿ ಗುತ್ತಿಗೆ ಪ್ರದೇಶದಲ್ಲಿ ಪುನರುಜ್ಜೀವನ ಮತ್ತು ಪುನರ್ವಸತಿ ಕಾರ್ಯವನ್ನು ಕೈಗೊಳ್ಳಬೇಕಾಗಿರುತ್ತದೆ.<br>6. ಅದರಂತೆ, ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 8(1-A)ರ ಪ್ರಕಾರ ಪರಿಸರ ಇಲಾಖೆಯಿಂದ ಪರಿಸರ ಅನುಮತಿ ಪತ್ರ ಸಲ್ಲಿಸಿದ ನಂತರವೇ ಕಲ್ಲುಗಣಿಗುತ್ತಿಗೆ ಮಂಜೂರಾತಿಗೆ ಕ್ರಮ ತೆಗೆದುಕೊಳ್ಳಲಾಗುತ್ತಿದೆ. |

ಸಂಖ್ಯೆ ಸಿಐ 609 ಎಂಎಂಎನ್ 2021

Halappa BA

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.